

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 425 (569) |
| ಸದಸ್ಯರ ಹೆಸರು | : | ಶ್ರೀ ಬಿ.ಕೆ.ಹರಿಪ್ರಸಾದ್(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 05-02-2021. |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಸರ್ಕಾರ ಅಲ್ಪಸಂಖ್ಯಾತರಿಗಾಗಿ ರೂಪಿಸಿರುವ ಕಾರ್ಯಕ್ರಮಗಳಾವುವು; ಇದರಲ್ಲಿ ಅಲ್ಪಸಂಖ್ಯಾತರಿಗಾಗಿ ಮನೆ ನಿರ್ಮಾಣ ಯೋಜನೆ ಕಾರ್ಯಕ್ರಮವು ಸೇರಿದೆಯೇ; | **ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ**<br>ಅಲ್ಪಸಂಖ್ಯಾತರ ನಿರ್ದೇಶನಾಲಯದಿಂದ ಅಲ್ಪಸಂಖ್ಯಾತರಿಗಾಗಿ ರೂಪಿಸಿರುವ ಕಾರ್ಯಕ್ರಮಗಳ ವಿವರ ಈ ಕೆಳಕಂಡಂತಿದೆ.<br>1. ಅಲ್ಪಸಂಖ್ಯಾತರ ನಿರ್ದೇಶನ ಮತ್ತು ಆಡಳಿತ<br>2. ಕ್ರಿಶ್ಚಿಯನ್ ಸಮುದಾಯದ ಅಭಿವೃದ್ಧಿ<br>3. ಜೈನ್, ಬೌದ್ಧ ಮತ್ತು ಸಿಖ್ ಸಮುದಾಯದ ಅಭಿವೃದ್ಧಿ<br>4. ಸರ್ಕಾರಿ ಅಲ್ಪಸಂಖ್ಯಾತರ ಶಾಲೆಗಳಿಗೆ ಶಿಕ್ಷಣ ಮತ್ತು ಕಲಿಕೆ ಸಾಧನಗಳು.<br>5. ಅಲ್ಪಸಂಖ್ಯಾತರ ಶಾಲೆಗಳಿಗೆ ಉತ್ತೇಜನ<br>6. ಅಲ್ಪಸಂಖ್ಯಾತರಿಗೆ ವಿಧ್ಯಾರ್ಥಿವೇತನ ಮತ್ತು ಶುಲ್ಕ ಮರುಪಾವತಿ.<br>7. ಅಲ್ಪಸಂಖ್ಯಾತರ ವಿಧ್ಯಾರ್ಥಿಗಳಿಗೆ ವಿದ್ಯಾಸಿರಿ<br>8. ಅಲ್ಪಸಂಖ್ಯಾತರಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ.<br>9. ಮದರಸಗಳಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣವನ್ನು ಒದಗಿಸುವುದು.<br>10. ಅಲ್ಪಸಂಖ್ಯಾತರಿಗಾಗಿ ನೂತನ ಹಾಸ್ಟೆಲ್ ಗಳ ಪ್ರಾರಂಭ ಮತ್ತು ಮೌಲಾನಾ ಆಜಾದ್ ಶಾಲೆ/ ಕಾಲೇಜುಗಳ ನಿರ್ವಹಣೆ.<br>11. ಅಲ್ಪಸಂಖ್ಯಾತರ ವಸತಿ ಶಾಲೆಗಳು<br>12. 11 ಕಾರ್ಪೋರೇಷನ್‌ಗಳಲ್ಲಿ ಅಲ್ಪಸಂಖ್ಯಾತರ ಸ್ಲಮ್/ಕಾಲೋನಿ ಅಭಿವೃದ್ಧಿ ಯೋಜನೆ.<br>13. ಅಲ್ಪಸಂಖ್ಯಾತರಿಗಾಗಿ ವಸತಿ ನಿಲಯ ಮತ್ತು ವಸತಿ ಶಾಲೆ ಕಟ್ಟಡಗಳ ನಿರ್ಮಾಣ ಅಲ್ಪಸಂಖ್ಯಾತರ ಕಛೇರಿ ಸಂಕೀರ್ಣಗಳು ಮತ್ತು ಉರ್ದು ಸಮಾವೇಶಗಳು ಮತ್ತು ಸಂಸ್ಕೃತಿ ಕೇಂದ್ರ.<br>14. ಪ್ರಧಾನ ಮಂತ್ರಿ ಜನ ವಿಕಾಸ ಕಾರ್ಯಕ್ರಮ<br>15. ಅಲ್ಪಸಂಖ್ಯಾತರಿಗಾಗಿ ಹಾಸ್ಟೆಲ್‌ಗಳು<br>16. ಅಲ್ಪಸಂಖ್ಯಾತರ ಕಾನೂನು ಪದವೀಧರಿಗೆ ತರಬೇತಿ ಭತ್ಯೆ<br>17. ಅಲ್ಪಸಂಖ್ಯಾತರಿಗಾಗಿ ಅನಾಥಾಲಯ.<br>18. ಕಾರ್ಯಕಾರಿ ಸಿಬ್ಬಂದಿ.<br>ಇದರಲ್ಲಿ ಅಲ್ಪಸಂಖ್ಯಾತರಿಗಾಗಿ ಮನೆ ನಿರ್ಮಾಣ ಯೋಜನೆ ಕಾರ್ಯಕ್ರಮ ಇರುವುದಿಲ್ಲ. |

| | | |
|---|---|---|
| | | **ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ**<br><br>ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದಿಂದ ಈ ಕೆಳಕಂಡ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.<br>1. "ವೃತ್ತಿ ಪ್ರೋತ್ಸಾಹ ಯೋಜನೆ"(ಪರಿಷ್ಕೃತ)<br>2. 'ಅರಿವು' (ವಿದ್ಯಾಭ್ಯಾಸ) ಸಾಲ ಯೋಜನೆ (ಪರಿಷ್ಕೃತ)<br>3. ಗಂಗಾ ಕಲ್ಯಾಣ ಯೋಜನೆ<br>4. 'ಶ್ರಮಶಕ್ತಿ' ಯೋಜನೆ<br>5. ಸಣ್ಣ (ಮೈಕ್ರೋ) ಸಾಲ ಮತ್ತು ಸಹಾಯಧನ ಯೋಜನೆ.<br>6. ಮೈಕ್ರೋ ವೈಯಕ್ತಿಯ (ಸಣ್ಣ) (ಕೋವಿಡ್-19) ಸಾಲ ಯೋಜನೆ.<br>7. ಗೃಹ ನಿರ್ಮಾಣ – ಮಾರ್ಜಿನ್ ಹಣ ಸಾಲ ಯೋಜನೆ.<br>8. ಪಶು ಸಂಗೋಪನೆ ಯೋಜನೆ.<br>9. ಟ್ಯಾಕ್ಸಿ/ಗೂಡ್ಸ್ ವಾಹನ ಖರೀದಿಸಲು ಸಹಾಯಧನ ಯೋಜನೆ.<br>10. ಅಲ್ಪಸಂಖ್ಯಾತರ ರೈತರ ಕಲ್ಯಾಣ ಯೋಜನೆ.<br>11. 'ಆಟೋ ಮೊಬೈಲ್ ಸರ್ವಿಸ್, ಬಿದರಿ ಮತ್ತು ರೇಷ್ಮೆ, ಚನ್ನಪಟ್ಟಣ ಕರಕುಶಲ ಚಟುವಟಿಕೆಗಳಿಗೆ ತರಬೇತಿ ಪ್ರೋತ್ಸಾಹ ಹಾಗೂ ಸಾಲ ಮತ್ತು ಸಹಾಯಧನ ಹಾಗೂ ಮೂಲಭೂತ ಸೌಕರ್ಯ ನೀಡಲಾಗುವುದು.'<br>12. ಮನೆ ಮಳಿಗೆ ಯೋಜನೆ.<br><br>**ಗೃಹ ನಿರ್ಮಾಣ ಮಾರ್ಜಿನ್ ಹಣ ಸಾಲದ ಯೋಜನೆ**<br><br>ಈ ಯೋಜನೆಯಡಿಯಲ್ಲಿ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು ಅಂದರೆ ರಾಜೀವ್‌ಗಾಂಧಿ ಗೃಹ ನಿರ್ಮಾಣ ನಿಗಮ, ಕರ್ನಾಟಕ ಗೃಹ ಮಂಡಳಿ, ಕೊಳಚೆ ನಿರ್ಮೂಲನ ಮಂಡಳಿ ಹಾಗೂ ಇತರೆ ಸರ್ಕಾರಿ ಸ್ವಾಮ್ಯದ ಮೂಲಕ ವಿವಿಧ ಗೃಹ ನಿರ್ಮಾಣ ಯೋಜನೆಗಳ ಅಡಿಯಲ್ಲಿ ಆಯ್ಕೆಯಾಗುವ ರಾಜ್ಯದಲ್ಲಿನ ಮತೀಯ ಅಲ್ಪಸಂಖ್ಯಾತರ ಫಲಾನುಭವಿಗಳಿಗೆ ಗೃಹ ನಿರ್ಮಾಣ ಮಾಡಲು ಗೃಹ ನಿರ್ಮಾಣದ ಘಟಕ ವೆಚ್ಚದನ್ವಯ ನಿಗದಿಪಡಿಸಲಾಗುವ ಫಲಾನುಭವಿಯ ವಂತಿಕೆಯನ್ನು (Beneficiaries Contribution) ಗರಿಷ್ಠ ರೂ.1.00 ಲಕ್ಷಗಳವರೆಗೆ ಮಾರ್ಜಿನ್ ಹಣ ಸಾಲವನ್ನಾಗಿ ಶೇಕಡ 4ರ ಬಡ್ಡಿದರದಲ್ಲಿ ಫಲಾನುಭವಿಯ ಪರವಾಗಿ ನಿರ್ಮಾಣ ಮಾಡುವ ಸಂಸ್ಥೆಗಳಿಗೆ ಒಡಂಬಡಿಕೆಯ ಮೂಲಕ ಬಿಡುಗಡೆ ಮಾಡಲಾಗುವುದು. |

S.A

| | | |
|---|---|---|
| ಆ. | ಸೇರಿದ್ದಲ್ಲಿ, ಇದಕ್ಕಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಒದಗಿಸಿದ ಅನುದಾನವೆಷ್ಟು; ಅದರಲ್ಲಿ ಎಷ್ಟು ಬಳಕೆಯಾಗಿದೆ? | ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದಲ್ಲಿ ಪ್ರಸ್ತುತ ಜಾರಿಯಲ್ಲಿರುವ ಗೃಹ ನಿರ್ಮಾಣ ಮಾರ್ಜಿನ್ ಹಣ ಸಾಲ ಯೋಜನೆಯಡಿಯಲ್ಲಿ 2020-21 ನೇ ಸಾಲಿನಲ್ಲಿ ರೂ.100.00 ಲಕ್ಷಗಳ ಗುರಿ ನಿಗದಿ ಪಡಿಸಲಾಗಿದೆ ಹಾಗೂ ರೂ.100.00 ಲಕ್ಷಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ 133 ಅಲ್ಪಸಂಖ್ಯಾತರ ಫಲಾನುಭವಿಗಳಿಗೆ ವಂತಿಕೆ ಮಾರ್ಜಿನ್ ಹಣ ಸಾಲವನ್ನು ಬಿಡುಗಡೆ ಮಾಡಲಾಗಿದೆ. |

ಸಂಖ್ಯೆ: **MWD 37 LMQ 2021**

**(ಶ್ರೀಮಂತ ಬಾಳಾಸಾಹೇಬ ಪಾಟೀಲ್)**
ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ
ಕಲ್ಯಾಣ ಸಚಿವರು

S.A